# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 342 |
| ಸದಸ್ಯರ ಹೆಸರು | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು). |
| ಉತ್ತರಿಸುವ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ, ಈ ವರ್ಷ ಭತ್ತದ ಕೊಯ್ಲಿನ ಸಂದರ್ಭದಲ್ಲಿ ಅಕಾಲಿಕ ಮಳೆ ಸುರಿದು, ಭತ್ತದ ಕೊಯ್ಲು ಸಾಕಷ್ಟು ಹಾಳಾಗಿರುವುದರಿಂದ, ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಡಗು ಜಿಲ್ಲೆಯಲ್ಲಿ, 2020-21 ನೇ ಸಾಲಿನಲ್ಲಿ ಭತ್ತದ ಕೊಯ್ಲಿನ ಸಂದರ್ಭದಲ್ಲಿ ಅಕಾಲಿಕ ಮಳೆ ಸುರಿದು, ಭತ್ತದ ಕೊಯ್ಲು ಸಾಕಷ್ಟು ಹಾಳಾಗಿರುವುದರಿಂದ, ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಪ್ರಸ್ತುತ ವರ್ಷದಲ್ಲಿ ಕೊಡಗು ಜಿಲ್ಲೆಯಲ್ಲಿ ಎಷ್ಟು ವಿಸ್ತೀರ್ಣದ ಭತ್ತದ ಕೊಯ್ಲು ಹಾನಿಗೊಳಗಾಗಿದೆ ಹಾಗೂ ಸದರಿ ನಷ್ಟದ ಅಂದಾಜಿನ ಸಂಪೂರ್ಣ ವಿವರಗಳೇನು; | ಕೊಡಗು ಜಿಲ್ಲೆಯಲ್ಲಿ 2020-21 ನೇ ಸಾಲಿನಲ್ಲಿ, ಒಟ್ಟು 144 ಹೆಕ್ಟೇರ್ ಪ್ರದೇಶದಲ್ಲಿ ಭತ್ತದ ಕೊಯ್ಲು ಹಾನಿಗೊಳಗಾಗಿದೆ. |

| ಕ್ರ ಸಂ | ತಾಲ್ಲೂಕು | ಅಕಾಲಿಕ ಮಳೆಯಿಂದ ಹಾನಿಯಾದ ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | ಅಂದಾಜು ನಷ್ಟದ ವಿವರ (ರೂ ಲಕ್ಷಗಳಲ್ಲಿ) |
|---|---|---|---|
| 1 | ಮಡಿಕೇರಿ | 37 | 4.66 |
| 2 | ವಿರಾಜಪೇಟೆ | 24 | 3.03 |
| 3 | ಸೋಮವಾರಪೇಟೆ | 83 | 10.46 |
| | **ಒಟ್ಟು** | **144** | **18.15** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಈ ಕಾರಣದಿಂದ ಆರ್ಥಿಕ ಸಂಕಷ್ಟದಲ್ಲಿರುವ ರೈತರಿಗೆ ಸರ್ಕಾರ ಕಲ್ಪಿಸಲಿರುವ ತಕ್ಷಣದ ಪರಿಹಾರ, ನೆರವು ಹಾಗೂ ಸೌಲಭ್ಯಗಳೇನು; (ಸಂಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ 2020ರ ಆಗಸ್ಟ್ ಮಾಹೆಯಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಪ್ರವಾಹ ಮತ್ತು ಭೂ ಕುಸಿತದಿಂದಾಗಿ ಕೃಷಿ ಇಲಾಖೆ, ತೋಟಗಾರಿಕೆ ಇಲಾಖೆ ಮತ್ತು ಕಂದಾಯ ಇಲಾಖೆಯ ಅಧಿಕಾರಿಗಳ ಜಂಟಿ ಸರ್ವೆ ವರದಿಯ ಪ್ರಕಾರ 2850 ಹೆಕ್ಟೇರ್ ಭತ್ತದ ಬೆಳೆ ನಾಶವಾಗಿದ್ದು, NDRF/SDRF ಮಾರ್ಗಸೂಚಿಗಳನುಸಾರ ರೂ.193.80 ಲಕ್ಷ ಇನ್‌ಪುಟ್ ಸಬ್ಸಿಡಿಯನ್ನು ಬಿಡುಗಡೆ ಮಾಡಲಾಗಿದೆ. |
| ಈ) | ಸಂಕಷ್ಟದಲ್ಲಿರುವ ರೈತರಿಗೆ ಕೂಡಲೇ ನೆರವಾಗುವ ದೃಷ್ಟಿಯಿಂದ, ಬೆಂಬಲ ಬೆಲೆ ನೀಡುವ ಮೂಲಕ ಈ ವರ್ಷದ ಸಂಪೂರ್ಣ ಭತ್ತದ ಫಸಲನ್ನು ಖರೀದಿ ಮಾಡಲು ಸರ್ಕಾರ ಕ್ರಮ ವಹಿಸುವುದೇ? | ಕೇಂದ್ರ ಸರ್ಕಾರವು 2020-21ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ 12.10 ಲಕ್ಷ ಮೆಟ್ರಿಕ್ ಟನ್ ಭತ್ತವನ್ನು ಖರೀದಿಸಲು ಅನುಮತಿ ನೀಡಿರುತ್ತದೆ.<br>ಕೇಂದ್ರ ಸರ್ಕಾರದ ಮಾರ್ಗಸೂಚಿಗಳನ್ವಯ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ನೋಂದಣಿ ಮಾಡಿದಂತಹ ರೈತರಿಂದ ಪ್ರತಿ ಎಕರೆಗೆ 25 ಕ್ವಿಂಟಾಲ್ ನಂತೆ ಪ್ರತಿ ರೈತರಿಂದ ಗರಿಷ್ಠ 75 ಕ್ವಿಂಟಾಲ್ ಭತ್ತವನ್ನು ಖರೀದಿಸಲಾಗುತ್ತಿದೆ. (ಆದೇಶದ ಪ್ರತಿಗಳನ್ನು ಲಗತ್ತಿಸಿದೆ) |

**ಸಂಖ್ಯೆ: AGRI-ACT/16/ 2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2020-21ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ಭತ್ತ ಖರೀದಿ ಮಾಡುವ ಬಗ್ಗೆ.

ಓದಲಾಗಿದೆ:-1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:3(32)/2019-ಪಿವೈ-I ದಿನಾಂಕ: 10.06.2020

2. ದಿನಾಂಕ:22.10.2020 ರಂದು ನಡೆದ ಸಚಿವ ಸಂಪುಟ ಉಪಸಮಿತಿಯ ನಡವಳಿ.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮಸಂಖ್ಯೆ(1)ರ ಪತ್ರದಲ್ಲಿ ಕೇಂದ್ರ ಸರ್ಕಾರವು 2020-21ನೇ ಸಾಲಿಗೆ ರೈತರಿಂದ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸುವ ಭತ್ತ ರಾಗಿ ಮತ್ತು ಬಿಳಿಜೋಳ ಆಹಾರಧಾನ್ಯಗಳಿಗೆ ಈ ಕೆಳಕಂಡ ದರ ನಿಗದಿಪಡಿಸಿದೆ. ಹಾಗೂ ಸದರಿ ಋತುವಿನಲ್ಲಿ 1.10 ಲಕ್ಷ ಮೆಟ್ರಿಕ್ ಟನ್ ಭತ್ತವನ್ನು ಬೆಂಬಲ ಬೆಲೆ ಯೋಜನೆಯಡಿ ಖರೀದಿಸಲು ಅನುಮತಿಯನ್ನು ನೀಡಿದೆ.

| ಕ್ರ.ಸಂ | ಧಾನ್ಯ | ದರ (ಪ್ರತಿ ಕ್ವಿಂಟಾಲ್ ಗೆ)ರೂ.ಗಳಲ್ಲಿ |
|---|---|---|
| 1 | ಭತ್ತ –ಸಾಮಾನ್ಯ | 1868-00 |
| 2 | ಭತ್ತ ಗ್ರೇಡ್-ಎ | 1888-00 |
| 3 | ಬಿಳಿಜೋಳ-ಹೈಬ್ರಿಡ್ | 2620-00 |
| 4 | ಬಿಳಿಜೋಳ-ಮಾಲ್ದಂಡಿ | 2640-00 |
| 5 | ರಾಗಿ | 3295-00 |

ಮೇಲೆ ಓದಲಾದ (2)ರಲ್ಲಿನ ಸಚಿವ ಸಂಪುಟ ಉಪ ಸಮಿತಿಯ ಸಭೆಯಲ್ಲಿ 1.10 ಲಕ್ಷ ಮೆ.ಟನ್ ಭತ್ತ, ರೈತರಿಂದ ಖರೀದಿ ಮಾಡಲು ಹಾಗೂ ಸದರಿ ಖರೀದಿಗೆ ಸಂಬಂಧಿಸಿದಂತೆ ಖರೀದಿಯ ವೇಳಾ ಪಟ್ಟಿಗೆ ಅನುಮೋದನೆಯನ್ನು ನೀಡಿದೆ.

2020-21ನೇ ಸಾಲಿನ ಮುಂಗಾರು ಋತುವಿನಲ್ಲಿ ರೈತರು ಬೆಳೆದಿರುವ ಆಹಾರ ಧಾನ್ಯಗಳ ಸಂಗ್ರಹಣೆಗೆ ಈಗಾಗಲೇ ಕೃಷಿ ಇಲಾಖೆಯಿಂದ ಜಾರಿಗೊಳಿಸಿರುವ "ಫ್ರೂಟ್ಸ್" ದತ್ತಾಂಶದಿಂದ ರೈತರ ಮಾಹಿತಿಯನ್ನು ನೇರವಾಗಿ ಪಡೆದು ಕೃಷಿ ಇಲಾಖೆ ಒದಗಿಸಿರುವ ಸರಾಸರಿ ಬೆಳೆ ಮಾಹಿತಿಯನ್ವಯ ಹಾಗೂ ಕೇಂದ್ರ ಸರ್ಕಾರದ ಮಾರ್ಗ ಸೂಚಿಗಳನ್ವಯ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿ ನೋಂದಣಿ ಮಾಡಿದಂತಹ ರೈತರಿಂದ ಭತ್ತವನ್ನು ಸರ್ಕಾರವು ನಿಗಧಿಪಡಿಸುವ ಅಕ್ಕಿ ಗಿರಣಿಗಳ ಮೂಲಕ ನೇರವಾಗಿ ಪಡೆದುಕೊಳ್ಳಲು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶ:

ಸರ್ಕಾರದ ಆದೇಶ ಸಂಖ್ಯೆ: ಆನಾಸ 125 ಆರ್ ಪಿ ಆರ್ 2020(ಇ-ಆಫೀಸ್)

ಬೆಂಗಳೂರು, ದಿನಾಂಕ:04.11.2020

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ 2020-21 ನೇ ಸಾಲಿನ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ 1.10 ಲಕ್ಷ ಮೆ.ಟನ್ ಭತ್ತವನ್ನು ಸಾಮಾನ್ಯ ಭತ್ತ ಪ್ರತಿ ಕ್ವಿಂಟಾಲ್ ಗೆ ರೂ.1868 ದರದಲ್ಲಿ ಹಾಗೂ ಗ್ರೇಡ್-ಎ ಭತ್ತವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1888 ರ ದರದಲ್ಲಿ ಖರೀದಿಸಲು ಆದೇಶಿಸಿದೆ.

2020-21 ನೇ ಸಾಲಿಗೆ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಭತ್ತವನ್ನುಖರೀದಿಸಲು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮತ ಮತ್ತು ಕರ್ನಾಟಕ ರಾಜ್ಯ ಸಹಕಾರ ಮಾರುಕಟ್ಟೆ ಮಹಾ ಮಂಡಳಿಗಳನ್ನು ಸಂಗ್ರಹಣಾ ಏಜೆನ್ಸಿಗಳನ್ನಾಗಿ ನೇಮಿಸಿ, ಈ ಕೆಳಕಂಡಂತೆ ಜಿಲ್ಲೆಗಳನ್ನು ಹಂಚಿಕೆ ಮಾಡಲಾಗಿದೆ. ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ನೀಡುವ ಸೂಚನೆ/ಆದೇಶಗಳನ್ವಯ ಖರೀದಿ ಪ್ರಕ್ರಿಯೆಯನ್ನು ಕೈಗೊಳ್ಳಲು ಆದೇಶಿಸಿದೆ.

| ಕ್ರ.ಸಂ | ಸಂಗ್ರಹಣಾ ಸಂಸ್ಥೆ | ನಿಯೋಜಿಸಿರುವ ಜಿಲ್ಲೆ |
|---|---|---|
| 1 | ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ | ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಶಿವಮೊಗ್ಗ, ರಾಮನಗರ, ಚಿಕ್ಕಬಳ್ಳಾಪುರ, ರಾಯಚೂರು, ಹಾವೇರಿ, ಕೊಪ್ಪಳ, ವಿಜಯಪುರ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ, ದಾವಣಗೆರೆ, ಬಾಗಲಕೋಟೆ, ತುಮಕೂರು, ಚಿತ್ರದುರ್ಗ, ಕಲಬುರಗಿ, ಬಳ್ಳಾರಿ, ಬೀದರ್, ಯಾದಗಿರಿ |
| 3 | ಕರ್ನಾಟಕ ರಾಜ್ಯ ಸಹಕಾರ ಮಾರುಕಟ್ಟೆ ಮಹಾಮಂಡಳಿ | ಹಾಸನ, ಬೆಳಗಾವಿ, ಧಾರವಾಡ, ಕೊಡಗು, ಗದಗ ಚಿಕ್ಕಮಗಳೂರು, ಚಾಮರಾಜನಗರ, ಮಂಡ್ಯ ಮತ್ತು ಮೈಸೂರು |

ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಸದರಿ ಜಿಲ್ಲೆಯಲ್ಲಿ ಕಾರ್ಯನಿರತವಾಗಿರುವ ಅಕ್ಕಿಗಿರಣಿಗಳನ್ನು ಭತ್ತ ಖರೀದಿ ಕಾರ್ಯಕ್ಕೆ ನೋಂದಾಯಿಸಿಕೊಂಡು ಅಕ್ಕಿಗಿರಣಿಗಳ ಹಲ್ಲಿಂಗ್ ಹಾಗೂ ಶೇಖರಣಾ ಸಾಮರ್ಥ್ಯಕ್ಕನುಗುಣವಾಗಿ ಸಂಗ್ರಹಣಾ ಕಾರ್ಯವನ್ನು ಮಾಡತಕ್ಕದ್ದು. ಒಂದು ಪಕ್ಷ ಜಿಲ್ಲೆಯಲ್ಲಿ ಕಾರ್ಯನಿರತ ಅಕ್ಕಿಗಿರಣಿಗಳು ಅಸ್ತಿತ್ವದಲ್ಲಿ ಇಲ್ಲದ ಪಕ್ಷದಲ್ಲಿ ಪಕ್ಕದ ಜಿಲ್ಲೆಗಳ ಅಕ್ಕಿಗಿರಣಿ ಮೂಲಕ ಸಂಗ್ರಹಣೆ ಕಾರ್ಯವನ್ನು ನಿರ್ವಹಿಸುವುದು. ಸದರಿ ಕಾರ್ಯಕ್ಕೆ ಅವಶ್ಯವಿರುವ ದತ್ತಾಂಶವನ್ನು ಆಯುಕ್ತರು, ಆಹಾರ ನಾಗರಿಕ ಸಬರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಎನ್.ಐ ಸಿ ಸಹಯೋಗದೊಂದಿಗೆ ಸಿದ್ದಪಡಿಸತಕ್ಕದ್ದು. ಹಾಗೂ ಕೇಂದ್ರ ಸರ್ಕಾರದ ಪೋರ್ಟಲ್ ನಲ್ಲಿ ಅಗತ್ಯ ದತ್ತಾಂಶವನ್ನು ದಾಖಲಿಸತಕ್ಕದ್ದು. ಜಿಲ್ಲೆಗಳ ಜಿಲ್ಲಾಧಿಕಾರಿಗಳು ಭತ್ತದ ಗುಣಮಟ್ಟವನ್ನು ಅರಿಯಲು ಮೂರನೇ ವ್ಯಕ್ತಿಯನ್ನು (Third Party Assayers) ನೇಮಕ ಮಾಡತಕ್ಕದ್ದು.

2020-21 ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಭತ್ತ ಖರೀದಿಗಾಗಿ ಈ ಕೆಳಕಂಡಂತೆ ವೇಳಾಪಟ್ಟಿಯನ್ನು ನಿಗಧಿಪಡಿಸಲಾಗಿದೆ;

| ಕ್ರ.ಸಂ | ವಿಷಯ | ಅವಧಿ |
|---|---|---|
| 1 | ಜಿಲ್ಲಾ ಮಟ್ಟದ ಟಾಸ್ಕ್‌ಫೋರ್ಸ್ ರಚನೆ ಮತ್ತು ಮೊದಲ ಸಭೆ | 05.11.2020ರಿಂದ 10.11.2020 |

| | | |
|---|---|---|
| 2 | ಜಿಲ್ಲಾ ಮಟ್ಟದಲ್ಲಿ ಗುಣಮಟ್ಟ ಪರಿಶೀಲನೆಗಾಗಿ ಅಸ್ಸೇಯರ್ ನೇಮಕಾತಿ ಮತ್ತು ತರಬೇತಿ | 10.11.2020 ರಿಂದ 15.11.2020 |
| 3 | ಜಿಲ್ಲಾ ಮಟ್ಟದಲ್ಲಿ ಅಕ್ಕಿ ಗಿರಣಿಗಳ ಹಲ್ಲಿಂಗ್ ಸಾಮರ್ಥ್ಯ ಹಾಗೂ ಭತ್ತ ಸಂಗ್ರಹಣೆ ಸಾಮರ್ಥ್ಯದ ವಿವರಗಳನ್ನು ಪಡೆದು ನೋಂದಣಿ ಕಾರ್ಯ | 20.11.2020 ರಿಂದ 25.11.2020 |
| 4 | ಬೆಂಬಲ ಬೆಲೆ ಯೋಜನೆಯಡಿ ಭತ್ತ ಖರೀದಿ ಬಗ್ಗೆ ಜಿಲ್ಲಾ ವ್ಯಾಪ್ತಿಯಲ್ಲಿ ರೈತರಿಗೆ ಅಗತ್ಯ ಪ್ರಚಾರ | 25.11.2020 ರಿಂದ 27.11.2020 |
| 5 | 2020-21 ರ ರೈತರ ನೋಂದಣಿ ಪ್ರಾರಂಭ | 30.11.2020 ರಿಂದ 30.12.2020 |
| 6 | ಅಕ್ಕಿ ಗಿರಣಿಗಳಿಂದ ನೋಂದಣಿ ವಿವರಕ್ಕನುಗುಣವಾಗಿ ಗಿರಣಿಗಳಲ್ಲಿ ಸಂಗ್ರಹಣೆ ಹಾಗೂ ಇತರೆ ವ್ಯವಸ್ಥೆಗಳಿಗೆ ಕಾಲಾವಕಾಶ | 01.12.2020 ರಿಂದ 10.12.2020 |
| 7 | ನೋಂದಾಯಿತ ರೈತರಿಂದ ಭತ್ತವನ್ನು ಖರೀದಿಸಿ ಮಿಲ್‌ಗಳಲ್ಲಿ ಶೇಖರಿಸುವ ಮತ್ತು ಪರಿವರ್ತಿಸುವ ಕಾರ್ಯಾರಂಭ ಮತ್ತು ಮುಕ್ತಾಯ | 20.12.2020 ರಿಂದ 20.03.2021 |

## ಭತ್ತ ಖರೀದಿಗೆ ಮಾರ್ಗಸೂಚಿಗಳು

1. ನೋಂದಣಿ ಮಾಡಿದ ರೈತರು ಇಲಾಖೆಯಿಂದ ಕಳುಹಿಸುವ ಎಸ್.ಎಂ.ಎಸ್ ಆಧಾರದ ಮೇಲೆ ಸಂಬಂಧಪಟ್ಟ ಅಕ್ಕಿ ಗಿರಣಿಗಳಿಗೆ ಭತ್ತದ ಮಾದರಿಯ (Sample)ನ್ನು ಕಡ್ಡಾಯವಾಗಿ ನೀಡತಕ್ಕದ್ದು.
2. ಸಾಮಾನ್ಯ ಭತ್ತವನ್ನು ಪ್ರತಿ ರೈತರಿಂದ ಉತ್ಪಾದನೆಗೆ ಅನುಗುಣವಾಗಿ ಗರಿಷ್ಟ 40 ಕ್ವಿಂಟಾಲ್ ಮೀರದಂತೆ ಖರೀದಿಸತಕ್ಕದ್ದು. (ಪ್ರತಿ ಎಕರೆಗೆ 16 ಕ್ವಿಂ.ನಂತೆ)
3. ಅಕ್ಕಿ ಗಿರಣಿ ಮಾಲೀಕರು ರೈತರಿಂದ ಸ್ವೀಕರಿಸಿದ ಭತ್ತದ ಮಾದರಿಯ (Sample)ನ್ನು ಸಂಗ್ರಹಣಾ ಏಜೆನ್ಸಿಗಳಿಂದ ನೇಮಕ ಮಾಡುವ ಗುಣಮಟ್ಟ ಪರಿಶೀಲನಾ ಅಧಿಕಾರಿಯ ಮೂಲಕ ಗುಣಮಟ್ಟ ದೃಢೀಕರಣ ಪಡೆದ ನಂತರವೇ ಭತ್ತವನ್ನು ಖರೀದಿಸಿ ಸಂಗ್ರಹಣೆ ಮಾಡತಕ್ಕದ್ದು.
4. ಭತ್ತವನ್ನು ರೈತರು ತಮ್ಮ ಚೀಲಗಳಲ್ಲಿ ತಂದು ಅಕ್ಕಿ ಗಿರಣಿಗೆ ಸಲ್ಲಿಸಿದಾಗ ಪ್ರತಿ ಕ್ವಿಂಟಾಲ್ ಚೀಲಕ್ಕೆ ರೂ.6/- ರಂತೆ ಖರೀದಿ ಏಜೆನ್ಸಿಗಳು ಪಾವತಿ ಮಾಡತಕ್ಕದ್ದು.
5. ರೈತರಿಂದ ಭತ್ತವನ್ನು ಪಡೆದ ನಂತರ ಅಕ್ಕಿ ಗಿರಣಿ ಮಾಲೀಕರು ಸದರಿ ಮಾಹಿತಿಯನ್ನು ಆನ್‌ಲೈನ್‌ನಲ್ಲಿ ನಮೂದಿಸಬೇಕು. ಹೀಗೆ ನಮೂದಿಸುವಾಗ ಗುಣಮಟ್ಟ ಪರೀಶಿಲನಾ ಅಧಿಕಾರಿ ನೀಡಿರುವ ಒಪ್ಪಿಗೆ ಪತ್ರವನ್ನು ಆನ್ ಲೈನ್ ನಲ್ಲಿ ಸ್ಕ್ಯಾನ್ ಮಾಡಿ ಅಪ್ ಲೋಡ್ ಮಾಡತಕ್ಕದ್ದು.

6. ಅಕ್ಕಿ ಗಿರಣಿ ಮಾಲೀಕರಿಂದ ಭತ್ತದ ವಿವರ ಲಭ್ಯವಾದ ತಕ್ಷಣ ಖರೀದಿ ಏಜೆನ್ಸಿಗಳು ಭತ್ತವನ್ನು ಸರಬರಾಜು ಮಾಡಿದ ರೈತನಿಗೆ 3 ದಿನದೊಳಗಾಗಿ ಅವರ ಬ್ಯಾಂಕ್ ಖಾತೆಗಳಿಗೆ ಹಣವನ್ನು ವರ್ಗಾವಣೆ ಮಾಡತಕ್ಕದ್ದು.
7. ಯಾವುದೇ ಜಿಲ್ಲೆಯಲ್ಲಿ ಅಕ್ಕಿ ಗಿರಣಿಗಳು ನೋಂದಾಯಿಸದಿದ್ದಲ್ಲಿ, ಪಕ್ಕ ಜಿಲ್ಲೆಯ ಅಕ್ಕಿ ಗಿರಣಿಗಳನ್ನು ಕೂಡ ರೈತರಿಂದ ಖರೀದಿಗೆ ಹತ್ತಿರವಾಗುವಂತೆ ಗಣನೆಗೆ ತೆಗೆದುಕೊಂಡು ನೋಂದಾಯಿಸಲು ಅವಕಾಶ ನೀಡುವುದು. ಅದರಂತೆ, ಅಕ್ಕಿ ಗಿರಣಿಗಳನ್ನು ಗುರುತಿಸಲು ಕ್ರಮವಹಿಸುವುದು ಹಾಗೂ ಒಂದು ಅಕ್ಕಿ ಗಿರಣಿಗೆ ಒಂದಕ್ಕಿಂತ ಹೆಚ್ಚು ಜಿಲ್ಲೆಯಲ್ಲಿ ನೋಂದಾಯಿಸಲು ಕೂಡ ಅವಕಾಶ ನೀಡುವುದು.
8. ಜಿಲ್ಲೆಗಳಲ್ಲಿ ಯಾವುದೇ ಅಕ್ಕಿ ಗಿರಣಿಗಳು ನೋಂದಣಿ ಮಾಡದಿದ್ದಲ್ಲಿ , ಪಕ್ಕದ ಜಿಲ್ಲೆಯ ಹತ್ತಿರದ ಅಕ್ಕಿ ಗಿರಣಿಗೆ ಭತ್ತವನ್ನು ಸಾಗಾಣಿಕೆ ಮಾಡಿದ್ದಲ್ಲಿ, ಅಂತಹ ಸಾಗಾಣಿಕಾ ವೆಚ್ಚವನ್ನು ಸಾರ್ವಜನಿಕ ವಿತರಣಾ ಪದ್ಧತಿಯ ನಿರ್ಧರಿತ ದರದಂತೆಯೇ ಜಿಲ್ಲಾ ಖರೀದಿ ಏಜೆನ್ಸಿಯ ಮೂಲಕ ರೈತರಿಗೆ ಪಾವತಿಸುವುದು.
9. ಅಕ್ಕಿ ಗಿರಣಿಗಳಲ್ಲಿ ಖರೀದಿ ಸಂದರ್ಭದಲ್ಲಿ ರೈತರಿಂದ ಬಂದಿರುವ ಭತ್ತದ ಗುಣಮಟ್ಟದಲ್ಲಿ ಯಾವುದೇ ಗೊಂದಲುಗಳು ಉದ್ಭವಿಸಿದ್ದಲ್ಲಿ ಜಿಲ್ಲಾ ಟಾಸ್ಕ್ ಫೋರ್ಸ್ ನ ಗ್ರೇಡರ್ ಮೌಲ್ಯ ಮಾಪನದ ಮೂಲಕ ಬಗೆಹರಿಸುವುದು.

ರಾಜ್ಯದಲ್ಲಿ ಕನಿಷ್ಟ ಬೆಂಬಲ ಬೆಲೆ ಯೋಜನೆಯ ಅನುಷ್ಠಾನದಲ್ಲಿ ಅಪರ ನಿರ್ದೇಶಕರು-1, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ರಾಜ್ಯ ಮಟ್ಟದ ನೋಡಲ್ ಅಧಿಕಾರಿಯಾಗಿ ಕಾರ್ಯನಿರ್ವಹಿಸಲು ನೇಮಿಸಲಾಗಿದೆ.

ಖರೀದಿ ಪ್ರಕ್ರಿಯೆಗೆ ತಗಲುವ ವೆಚ್ಚವನ್ನು ಸಹಕಾರ ಇಲಾಖೆಯ ಎ.ಪಿ.ಎಂ.ಸಿ ಆವರ್ತ ನಿಧಿಯಿಂದ ಭರಿಸುವುದು.

ಅನುಷ್ಠಾನಕ್ಕೆ ಸಂಬಂಧಿಸಿದಂತೆ ಇತರೆ ಮಾರ್ಗಸೂಚಿ/ಆದೇಶಗಳನ್ನು ಕಾಲಕಾಲಕ್ಕೆ ನೀಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

ಇವರಿಗೆ:

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಬೆಂಗಳೂರು. ಈ ಆದೇಶವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 200 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:

1. ಪ್ರಧಾನ ಮಹಾಲೇಖಪಾಲರರು (ಜಿ & ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398,ಬೆಂಗಳೂರು-560001.

2. ಪ್ರಧಾನ ಮಹಾಲೇಖಪಾಲರರು (ಇ & ಆರ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398,ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ: 5329,ಬೆಂಗಳೂರು-560001.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ, ಬಹು ಮಹಡಿ ಕಟ್ಟಡ, ಬೆಂಗಳೂರು.
5. ಆಯುಕ್ತರು, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.
6. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು.
7. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಬೆಂಗಳೂರು
8. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ರಾಜ್ಯ ಸಹಕಾರ ಮಾರುಕಟ್ಟೆ ಮಹಾಮಂಡಳಿ, ಬೆಂಗಳೂರು
9. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳ, ರಾಜಭವನ ರಸ್ತೆ, ಬೆಂಗಳೂರು.
10. ವ್ಯವಸ್ಥಾಪಕ ನಿರ್ದೇಶರು (ಕೆ.ಟಿ.ಕೆ); ಭಾರತ ಆಹಾರ ನಿಗಮ, ಬೆಂಗಳೂರು.
11. ನಿರ್ದೇಶಕರು, ಖಜಾನೆ ಇಲಾಖೆ, ಪೋಡಿಯಂ ಬ್ಲಾಕ್, ವಿ.ವಿ ಮಿನಿ ಗೋಪುರ, ಡಾ|| ಅಂಬೇಡ್ಕರ್ ರಸ್ತೆ ಬೆಂಗಳೂರು.
12. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
13. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಪೆಚ್ಚ-5, ವಿಧಾನಸೌಧ, ಬೆಂಗಳೂರು,
14. ಸಂಬಂಧಪಟ್ಟ ಜಿಲ್ಲೆಯ ಜಂಟಿ ನಿರ್ದೇಶಕರು /ಉಪ ನಿರ್ದೇಶಕರು , ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, (ಆಯುಕ್ತರು, ಆನಾಸ & ಗ್ರಾವ್ಯ ಇಲಾಖೆ ಇವರ ಮುಖಾಂತರ)
15. ಸಂಬಂಧಪಟ್ಟ ಜಿಲ್ಲೆಯ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, (ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು ಇವರ ಮುಖಾಂತರ)
16. ಶಾಖಾ ರಕ್ಷಾ ಕಡತ /ಹೆಚ್ಚುವರಿ ಪ್ರತಿ.

ಪ್ರತಿ ಮಾಹಿತಿಗಾಗಿ:

1. ಸನ್ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳ, ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಮಾನ್ಯ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿ, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ವಿಕಾಸಸೌಧ, ಬೆಂಗಳೂರು.

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2020-21ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ಭತ್ತ ಖರೀದಿ ಮಾಡುವ ಬಗ್ಗೆ

ಓದಲಾಗಿದೆ:-1. ಸರ್ಕಾರದ ಆದೇಶ ಸಂಖ್ಯೆ: ಆನಾಸ 125 ಆರ್‌ಪಿಆರ್ 2020, ದಿನಾಂಕ: 04.11.2020

2. ದಿನಾಂಕ:07.12.2020 ರಂದು ನಡೆದ ಸಚಿವ ಸಂಪುಟ ಉಪಸಮಿತಿಯ ನಡವಳಿ.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮಸಂಖ್ಯೆ(1) ರ ಸರ್ಕಾರಿ ಆದೇಶದಲ್ಲಿ 2020-21 ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ಭತ್ತ, ಖರೀದಿಸಲು ಮಾರ್ಗಸೂಚಿಗಳನ್ನು ನಿಗಧಿಪಡಿಸಿ ಆದೇಶಿಸಲಾಗಿದೆ. ಮೇಲೆ ಓದಲಾದ (2)ರಲ್ಲಿನ ಸಚಿವ ಸಂಪುಟದ ಉಪ ಸಮಿತಿಯ ಸಭೆಯಲ್ಲಿ ಭತ್ತ ಖರೀದಿ ಪ್ರಮಾಣದ ಮಿತಿಯನ್ನು ಪ್ರತಿ ಎಕರೆಗೆ 25 ಕ್ವಿಂಟಾಲ್‌ನಂತೆ ಗರಿಷ್ಠ 75 ಕ್ವಿಂಟಾಲ್ ಭತ್ತವನ್ನು ಪ್ರತಿ ರೈತರಿಂದ ಖರೀದಿಸಲು ರೈತರ ನೋಂದಣಿಯೊಂದಿಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಭತ್ತ ಖರೀದಿಯನ್ನು ಪ್ರಾರಂಭಿಸಲು ಸಚಿವ ಸಚಿವ ಉಪ ಸಮಿತಿಯು ತೀರ್ಮಾನಿಸಿದೆ. ಸಚಿವ ಸಂಪುಟ ಉಪ ಸಮಿತಿಯ ತೀರ್ಮಾನದಂತೆ ಕ್ರಮವಹಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಆನಾಸ 125 ಆರ್‌ಪಿಆರ್ 2020,(ಇ-ಆಫೀಸ್)

ಬೆಂಗಳೂರು, ದಿನಾಂಕ: 08.12.2020

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2020-21 ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಪ್ರತಿ ರೈತರಿಂದ ಪ್ರತಿ ಎಕರೆಗೆ 25 ಕ್ವಿಂಟಾಲ್‌ನಂತೆ ಗರಿಷ್ಠ 75 ಕ್ವಿಂಟಾಲ್ ಭತ್ತವನ್ನು ಖರೀದಿಸಲು ಹಾಗೂ ರೈತರ ನೋಂದಣಿಯೊಂದಿಗೆ ಭತ್ತ ಖರೀದಿಯನ್ನು ತಕ್ಷಣದಿಂದಲೇ (08.12.2020) ಪ್ರಾರಂಭಿಸಿ 07.03.2021 ರವರೆಗೆ ಖರೀದಿ ಪ್ರಕ್ರಿಯೆಯನ್ನು ಮುಂದುವರೆಸಲು ಆದೇಶಿಸಲಾಗಿದೆ. ಇನ್ನುಳಿದಂತೆ ದಿನಾಂಕ: 04.11.2020 ರ ಆದೇಶದಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

8/12/2020

ಇವರಿಗೆ:

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಬೆಂಗಳೂರು. ಈ ಆದೇಶವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 200 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:

1. ಪ್ರಧಾನ ಮಹಾಲೇಖಪಾಲರರು (ಜಿ & ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398,ಬೆಂಗಳೂರು-560001.

2. ಪ್ರಧಾನ ಮಹಾಲೇಖಪಾಲರರು (ಇ & ಆರ.ಎಸ್.ಎ), ಕರ್ನಾಟಕ, ಹೊಸ ಕಟ್ಟಡ ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ: 5398,ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ: 5329,ಬೆಂಗಳೂರು-560001.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ, ಬಹು ಮಹಡಿ ಕಟ್ಟಡ, ಬೆಂಗಳೂರು.
5. ಆಯುಕ್ತರು, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.
6. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು.
7. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ರಾಜ್ಯ ಸಹಕಾರ ಮಾರುಕಟ್ಟೆ ಮಹಾಮಂಡಳಿ, ಬೆಂಗಳೂರು
8. ವ್ಯವಸ್ಥಾಪಕ ನಿರ್ದೇಶರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳ, ರಾಜಭವನ ರಸ್ತೆ, ಬೆಂಗಳೂರು.
9. ವ್ಯವಸ್ಥಾಪಕ ನಿರ್ದೇಶರು (ಕೆ.ಟಿ.ಕೆ), ಭಾರತ ಆಹಾರ ನಿಗಮ, ಬೆಂಗಳೂರು.
10. ನಿರ್ದೇಶಕರು, ಖಜಾನೆ ಇಲಾಖೆ, ಪೋಡಿಯಂ ಬ್ಲಾಕ್ ವಿ.ವಿ ಮಿನಿ ಗೋಪುರ, ಡಾ|| ಅಂಬೇಡ್ಕರ್ ರಸ್ತೆ ಬೆಂಗಳೂರು.
11. ಜಂಟಿ ನಿರ್ದೇಶಕರು, ರಾಜ್ಯ ಹೂಜೂರ್ ಖಜಾನೆ, ಬೆಂಗಳೂರು.
12. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವೆಚ್ಚ-5 ವಿಧಾನಸೌಧ, ಬೆಂಗಳೂರು.
13. ಸಂಬಂಧಪಟ್ಟ ಜಿಲ್ಲೆಯ ಜಂಟಿ ನಿರ್ದೇಶಕರು/ ಉಪ ನಿರ್ದೇಶಕರು, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, (ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ಮುಖಾಂತರ
14. ಸಂಬಂಧಪಟ್ಟ ಜಿಲ್ಲೆಯ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ, (ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ನಾಗರಿಕ ಸರಬರಾಜು ನಿಗಮ ನಿಯಮಿತ ಇವರ ಮುಖಾಂತರ)
15. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ ಮಾಹಿತಿಗಾಗಿ:

1. ಸನ್ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳ, ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಮಾನ್ಯ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿ, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ವಿಕಾಸಸೌಧ, ಬೆಂಗಳೂರು.